**ಹಣ ಪಾವತಿಸುವ ವಿಧಾನ:**

ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದು ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ನಗದೀಕರಿಸುವಂತಿರತಕ್ಕದ್ದು.

1) ಖಾಲಿ ಟೆಂಡರ್ ದಸ್ತಾವೇಜುಗಳನ್ನು ಪಡೆಯಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 30.11.2005 (ಸಂಜೆ 5.30 ರವರೆಗೆ)
2) ಖಾಲಿ ಟೆಂಡರ್ ದಸ್ತಾವೇಜುಗಳನ್ನು ನೀಡುವ ಕೊನೆಯ ದಿನಾಂಕ: 09.12.2005 (ಸಂಜೆ 5.30 ರವರೆಗೆ)
3) ಭರ್ತಿ ಮಾಡಿದ ಮೊಹರು ಬಂದ ಟೆಂಡರ್ ದಸ್ತಾವೇಜುಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 17.12.2005 (ಸಂಜೆ 4.00 ರವರೆಗೆ)
4) ಭರ್ತಿ ಮಾಡಲಾದ ಟೆಂಡರ್‌ಗಳನ್ನು ಈ ಕೆಳಕಾಣಿಸಿದ ಕಾರ್ಯಾಲಯಗಳಲ್ಲಿಯೂ
   ಅ) ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಂಗಳೂರು ಇವರ ಕಾರ್ಯಾಲಯದಲ್ಲಿ.
   ಆ) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ದ) ವಲಯ, ಬೆಂಗಳೂರು ಇವರ ಕಾರ್ಯಾಲಯದಲ್ಲಿ ನಿಗದಿಪಡಿಸಿದ ದಿನಾಂಕ ಮತ್ತು ವೇಳೆಯಲ್ಲಿ ಸ್ವೀಕರಿಸಲಾಗುವುದು.
5) ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಡಿ.ಡಿ. ಅಥವಾ ಬ್ಯಾಂಕ್ ಚೆಕ್‌ನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಹೆಸರಿಗೆ ಪಡೆದಿರಬೇಕು. ಅಥವಾ ಕಾರ್ಯಪಾಲಕ ಅಭಿಯಂತರರ ಹೆಸರಿಗೆ ಎನ್.ಎಸ್.ಸಿ.ಯನ್ನು ಟೆಂಡರ್ ಸಲ್ಲಿಸುವ ಸಂದರ್ಭದಲ್ಲಿ ಪ್ಲೆಡ್ಜ್ ಮಾಡಿರಬೇಕು. ಮಾನ್ಯತೆ ಹೊಂದಿರದ ಇ.ಎಂ.ಡಿ. ಟೆಂಡರ್‌ನೊಂದಿಗೆ ಲಗತ್ತಿಸಿ ಸಲ್ಲಿಸಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ರದ್ದುಗೊಳಿಸಲಾಗುವುದು. ಈ ಇ.ಎಂ.ಡಿ.ಯನ್ನು ಟೆಂಡರ್ ತೆರೆದ ದಿನಾಂಕದಿಂದ 90 (ತೊಂಭತ್ತು) ದಿವಸದ ಅವಧಿಗೆ ಮಾನ್ಯತೆ ಹೊಂದಿರಬೇಕು.
6) ಈ ಕೆಳಕಂಡ ದೃಢೀಕರಿಸಿದ ಪ್ರಮಾಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಜೊತೆಯಲ್ಲಿ ಲಗತ್ತಿಸಿರಬೇಕು.
   ಅ) ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
   ಆ) ಇತ್ತೀಚಿನ ಇನ್‌ಕಂ ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ.
   ಇ) ಕರ್ನಾಟಕ ರಾಜ್ಯದ ಇತ್ತೀಚಿನ ಸೇಲ್ಸ್ ಟ್ಯಾಕ್ಸ್ ಕ್ಲಿಯರೆನ್ಸ್ ಪ್ರಮಾಣ ಪತ್ರ.

   ಈ ಮೇಲಿನ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ದಿನಾಂಕ: 17.12.2005 ಅಥವಾ ಮುಂಚಿತವಾಗಿ ಕಛೇರಿ ವೇಳೆಯಲ್ಲಿ ಪರಿಶೀಲನೆಗಾಗಿ ಒದಗಿಸುವುದು.
7) ತಾಂತ್ರಿಕ ಬಿಡ್‌ಗಳನ್ನು ಈ ಕೆಳಗೆ ಸಹಿ ಮಾಡಿರುವ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ: 18.12.2005 ರಂದು ಮಧ್ಯಾಹ್ನ 4.00 ಗಂಟೆಗೆ ಅಥವಾ ಅನುಕೂಲವಾದ ದಿನಾಂಕದಂದು ತೆರೆಯಲಾಗುವುದು. ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿರುವವರ ಹೆಸರಿನ ಪಟ್ಟಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು. ಕೇವಲ ತಾಂತ್ರಿಕ ಬಿಡ್ಡಿನಲ್ಲಿ ಅರ್ಹತೆ ಹೊಂದಿದವರ ಆರ್ಥಿಕ ಬಿಡ್ಡನ್ನು ಮಾತ್ರ ಒಡೆದು ತುಲನೆ ಮಾಡಲಾಗುವುದು.

**ತಾಂತ್ರಿಕ ಬಿಡ್ ಭಾಗ-1**

ಗುತ್ತಿಗೆದಾರರು ತಮ್ಮ ತಾಂತ್ರಿಕ ಬಿಡ್ ಸಾಮರ್ಥ್ಯಕ್ಕೆ ಅನುಗುಣವಾಗಿ ಈ ಕೆಳಕಾಣಿಸಿರುವ ನಿಬಂಧನೆಗಳಿಗೆ ಅರ್ಹತೆ ಹೊಂದುವವರು ಮಾತ್ರ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1. ವೈಯಕ್ತಿಕ ಫರ್ಮ್/ ಸಂಯುಕ್ತ ಎರಡು ಅಥವಾ ಹೆಚ್ಚಿನ ಗುತ್ತಿಗೆದಾರರು ಪ್ರತಿಯೊಬ್ಬರು ಕೆಳಗಿನ ವಿವರ ಹೊಂದಿರಬೇಕು.
   2005-06ನೇ ಆರ್ಥಿಕ ಸಾಲಿನ ಹಿಂದಿನಿಂದ 5 ವರ್ಷಗಳ ವಹಿವಾಟಿನಲ್ಲಿ (2001-02 ರಿಂದ 2005-06);
   1) ಕನಿಷ್ಠ ಎರಡು ಆರ್ಥಿಕ ವರ್ಷದಲ್ಲಿ ರೂ.210.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ಸಿವಿಲ್ ನಿರ್ಮಾಣ ಕಾಮಗಾರಿಗಳಿಗೆ ಮಾತ್ರ) ವಾರ್ಷಿಕ ವಹಿವಾಟು ಮಾಡಿರಬೇಕು.
      (i) ಕಳೆದ 5 ವರ್ಷಗಳಲ್ಲಿ ಮಾಡಿರುವ ಆರ್ಥಿಕ ವಹಿವಾಟಿಗೆ, 2005-06ನೇ ಸಾಲಿಗೆ ಹೋಲಿಸಿದಂತೆ ಪ್ರತಿ ಸಾಲಿಗೆ ಶೇಕಡಾ 10ರ ವೈಟೇಜ್ ಪರಿಗಣಿಸಲಾಗುವುದು.
      (ii) ಪ್ರಮುಖ ಗುತ್ತಿಗೆದಾರರೆಂದು ಕನಿಷ್ಠ ಇಂತಹದೇ ಒಂದು ಸಿವಿಲ್ ಕಾಮಗಾರಿ (ಶೇಕಡಾ 90ರಷ್ಟು ಗುತ್ತಿಗೆ ಮೊತ್ತಕ್ಕಿಂತ ಕಡಿಮೆ ಇಲ್ಲದಂತೆ) ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ, ಕಾಂಕ್ರಿಟ್ ಕೆಲಸ, ಪೈಪ್‌ಲೈನ್ ಕೆಲಸ ಹಾಗೂ ಕಾಲುವೆ ನಿರ್ಮಾಣ) ರೂ.95.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪೂರ್ಣಗೊಳಿಸಿರಬೇಕು. ಪ್ರಮುಖ ಗುತ್ತಿಗೆದಾರರೆಂದರೆ ಕಾಮಗಾರಿಯನ್ನು ಸ್ವತಃ ನಿರ್ಮಿಸಿ ಸ್ವಂತ ಅವರ ಹೆಸರಿನಲ್ಲಿ ಬಿಲ್ಲನ್ನು ಪಡೆದಿರತಕ್ಕದ್ದು.
      (iii) ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| | |
|---|---|
| (ಅ) ಅಗೆತದ ಕೆಲಸ (ಎಲ್ಲಾ ಸ್ತರಗಳು ಸೇರಿದಂತೆ) | - 17,500 ಘ.ಮೀ. |
| (ಬ) ಕಾಂಕ್ರೀಟ್ ಕೆಲಸ | - 500 ಘ.ಮೀ. |
| (ಕ) ಪೈಪ್‌ಲೈನ್ ಕೆಲಸ | - 3,700 ಘ.ಮೀ. |
| (ಡ) ಅರ್ಥ್ ಫಿಲ್ಲಿಂಗ್ | - 5,500 ಘ.ಮೀ. |

   2) ಅರ್ಜಿದಾರರು ಕೆಳಕಂಡ ಸಾಮರ್ಥ್ಯವನ್ನು ಪ್ರದರ್ಶಿಸುವುದು.
      (i) ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹದೆ ಅನುಭವವುಳ್ಳ ಒಬ್ಬ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣಿತರನ್ನು ಹೊಂದಿರಬೇಕು.
      (ii) ಈ ಕಾಮಗಾರಿಗೆ ಬೇಕಾದ ಸಂಪನ್ಮೂಲ ಚರಾಸ್ತಿ ಅಥವಾ ಹಣರೂಪದಲ್ಲಿ ಕನಿಷ್ಠ ರೂ.100.00 ಲಕ್ಷಗಳ ಲಭ್ಯತೆಯ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್ ಲೈನ್ಸ್/ ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು).
      (iii) ಗುತ್ತಿಗೆದಾರರು ಈ ಕೆಳ ಕಾಣಿಸಿದ ಯಂತ್ರೋಪಕರಣಗಳನ್ನು ಸ್ವಂತ ಅಥವಾ ಲೀಸ್ ಮೇಲೆ ಹೊಂದಿರತಕ್ಕದ್ದು.

| | |
|---|---|
| (ಅ) ಎಕ್ಸ್‌ಕವೇಟರ್/ ಪೊಕ್ಲೇನ್ (0.9 ಘ.ಮೀ. ಸಾಮರ್ಥ್ಯ) | - 2 ಸಂಖ್ಯೆ |
| (ಆ) ಲಾರಿಗಳು/ ಟಿಪ್ಪರ್‌ಗಳು | - 5 ಸಂಖ್ಯೆ |
| (ಇ) ಕಾಂಕ್ರೀಟ್ ಮೆಷಿನ್ ಮಿಕ್ಸರ್ (10/7 ಘ. ಅಡಿ ಸಾಮರ್ಥ್ಯ) | - 2 ಸಂಖ್ಯೆ |
| (ಈ) ವೈಬ್ರೇಟರ್ | - 2 ಸಂಖ್ಯೆ |
| (ಉ) ಪಂಪ್‌ಸೆಟ್ (8 ಹೆಚ್.ಪಿ. ಯಿಂದ 20 ಹೆಚ್.ಪಿ.) | - 2 ಸಂಖ್ಯೆ |
| (ಊ) ಕ್ರೇನ್/ ಚೈನ್ ಪುಲ್ಲಿ (2 ಟನ್ ಸಾಮರ್ಥ್ಯ) | - 1 ಸಂಖ್ಯೆ |

3) ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್. ಗುಣಮಟ್ಟವುಳ್ಳ ಸ್ಟೀಲ್, ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪೂರೈಸಿಕೊಳ್ಳತಕ್ಕದ್ದು.

4) ತಾಂತ್ರಿಕ ಬಿಡ್ಡಿನ ಅರ್ಹತೆಗಾಗಿ ಸಲ್ಲಿಸಿರುವ ದಸ್ತಾವೇಜುಗಳ ಪ್ರಾಮಾಣಿಕತೆ ಮತ್ತು ಸತ್ಯಾಸತ್ಯತೆಗಳನ್ನು ಖಚಿತಗೊಳಿಸಲು ಅವುಗಳ ಮೇಲೆ ಗುತ್ತಿಗೆದಾರರ ದೃಢೀಕರಿಸಿ ಸಹಿ ಮಾಡತಕ್ಕದ್ದು. ದಸ್ತಾವೇಜುಗಳ ಮೇಲೆ ಗುತ್ತಿಗೆದಾರರಿಂದ ದೃಢೀಕರಿಸಿ ಸಹಿ ಮಾಡದಿದ್ದಲ್ಲಿ ಅಂತಹ ದಸ್ತಾವೇಜುಗಳನ್ನು ತಾಂತ್ರಿಕ ಮೌಲ್ಯಮಾಪನ ಮಾಡಲು ಪರಿಗಣಿಸಲಾಗುವುದಿಲ್ಲ.
**ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ಮಾತ್ರ ಮುಂದೆ ತಿಳಿಸಲಾಗುವ ನಿಗದಿತ ದಿನಾಂಕ ಮತ್ತು ಸಮಯದಂದು ತೆರೆಯಲಾಗುವುದು.**

5) ಗುತ್ತಿಗೆದಾರರು ಕಾಮಗಾರಿ ನಿರ್ವಹಿಸುವ ಬಗ್ಗೆ ಅವಶ್ಯಕ ಮಾನವ ಶಕ್ತಿ ಹೊಂದಿರಬೇಕು.

6) ಅಂಚೆ/ ಕೊರಿಯರ್ ಮೂಲಕ ಟೆಂಡರ್ ದಸ್ತಾವೇಜುಗಳನ್ನು ಸಲ್ಲಿಸಿದ್ದಲ್ಲಿ, ತಡವಾಗಿ ತಲುಪಿದ್ದಲ್ಲಿ ಸಣ್ಣ ನೀರಾವರಿ ಇಲಾಖೆ ಅಂಚೆ ವಿಳಂಬಕ್ಕೆ ಹೊಣೆಗಾರರಾಗುವುದಿಲ್ಲ.

7) ಮೇಲೆ ತಿಳಿಸಿರುವ ದಿನಾಂಕಗಳಂದು ಸರ್ಕಾರಿ ರಜೆ ಇದ್ದಲ್ಲಿ ಮುಂದಿನ ದಿನಾಂಕವನ್ನು ಕೆಲಸದ ದಿನಾಂಕವೆಂದು ಪರಿಗಣಿಸುವುದು.

8) ಟೆಂಡರ್ ಸ್ವೀಕರಿಸುವ ಸಕ್ಷಮ ಅಧಿಕಾರಿಗಳು ಯಾವುದೇ ಟೆಂಡರ್ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.

9) ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೆಂಗಳೂರು ಇವರ ಕಛೇರಿಯ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು.

10) ಕೆಲಸಕ್ಕೆ ಬೇಕಾಗುವ ಭೂಮಿ (ಭಾಗಶಃ ಅಥವಾ ಪೂರ್ತಿ) ಸಣ್ಣ ನೀರಾವರಿ ಇಲಾಖೆ ಅಧೀನಕ್ಕೆ ಸ್ವಾಧೀನತೆಯಾಗದಿದ್ದಲ್ಲಿ ಗುತ್ತಿಗೆದಾರರು ಸ್ವತಃ ಸಂಧಾನದ ಮೂಲಕ ಸದರಿ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಕಾಮಗಾರಿ ಪ್ರಾರಂಭಿಸಬೇಕು. ಭೂಸ್ವಾಧೀನ ಸಂಧಾನತೆಯಿಂದ ಸಣ್ಣ ನೀರಾವರಿ ಇಲಾಖೆಗೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಅಥವಾ ಕ್ಲೇಮುಗಳನ್ನು ಗುತ್ತಿಗೆದಾರರು ಕೇಳುವಂತಿಲ್ಲ ಎಂಬುವುದು ಗಮನಿಸತಕ್ಕದ್ದು.

11) ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸುವ ಮೊದಲು ಕಾಮಗಾರಿ ಸ್ಥಳವನ್ನು ಪರಿವೀಕ್ಷಣೆ ಮಾಡಿ ಭಾಗವಹಿಸುವುದು. ನಂತರ ಕಾಮಗಾರಿಯ ಸ್ಥಳದ ಬಗ್ಗೆ ಯಾವುದೇ ತಂಟೆ ತಕರಾರುಗಳಿಗೆ ಇಲಾಖೆಯು ಜವಾಬ್ದಾರವಾಗುವುದಿಲ್ಲ.

12) ಟೆಂಡರ್ ಡಾಕ್ಯೂಮೆಂಟಿನ ಭಾಗ-2ರ ಸೆಕ್ಷನ್-1ರಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಷರತ್ತು ಅಥವಾ ಇನ್ನಾವುದೇ ಬದಲಾವಣೆ ಮಾಡಿದ್ದಲ್ಲಿ ಅಂತಹ ಟೆಂಡರುಗಳು ತಿರಸ್ಕರಿಸಲಾಗುವುದು.

13) ಈ ಬಗ್ಗೆ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

14) ಎಲ್ಲಾ ಲಕೋಟೆಗಳ ಮೇಲೆ ಕೆಲಸದ ಹೆಸರನ್ನು ಸ್ಪಷ್ಟವಾಗಿ ಬರೆಯಬೇಕು. ಹಾಗೂ ಲಕೋಟೆ-1 (ತಾಂತ್ರಿಕ ಬಿಡ್) ಹಾಗೂ ಲಕೋಟೆ-2 (ಆರ್ಥಿಕ ಬಿಡ್) ಎಂದು ಸ್ಪಷ್ಟವಾಗಿ ನಮೂದಿಸಬೇಕು. ಎರಡೂ ಲಕೋಟೆಗಳನ್ನು ಸೇರಿಸಿ ಒಂದು ದೊಡ್ಡ ಲಕೋಟೆಯಲ್ಲಿ ಸೀಲ್ ಮಾಡಿ, ಕೆಲಸದ ಹೆಸರನ್ನು ಬರೆದು ಟೆಂಡರ್ ಸಲ್ಲಿಸುವುದು.

**ರಾಮಾಂಜನಯ್ಯ**
ಕಾರ್ಯಪಾಲಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ಬೆಂಗಳೂರು.

ಪಿ.ಆರ್.615

## ಜಲ ಸಂಪನ್ಮೂಲ ಇಲಾಖೆ
## (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಅಭಿಯಂತರರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ
## ಅವಧಿ ವಿಸ್ತರಣೆ

**ಸಂಖ್ಯೆ:ಸ.ನೀ.ವಿ.ಗು/ಯೋಶಾ-4/ ಟೆಂಡರ್/ 2005-06/ 2648, ದಿನಾಂಕ: 26ನೇ ಅಕ್ಟೋಬರ್, 2005**

**ವಿಷಯ :** ಭಾರತ ಸರ್ಕಾರದ ಧನ ಸಹಾಯದಡಿಯಲ್ಲಿ ಗುಲ್ಬರ್ಗಾ ಜಿಲ್ಲೆಯಲ್ಲಿ ಕೆರೆಗಳ ಸಮಗ್ರ ಅಭಿವೃದ್ಧಿ ಪಡಿಸುವ ಕಾಮಗಾರಿಗಳು.

**ಉಲ್ಲೇಖ :**
1. ಈ ಕಛೇರಿಯ ಟೆಂಡರ್ ಪ್ರಕಟಣೆ ಪತ್ರ ಸಂಖ್ಯೆ: ಸ.ನೀ.ವಿ./ ಯೋಶಾ 4/ ಕೆರೆಗಳ ಅಭಿವೃದ್ಧಿ ಪ್ಯಾಕೇಜ್ ನಂ.1/ 2005-06/ 2493, ದಿನಾಂಕ: 05.10.2005.
2. ಈ ಕಛೇರಿಯ ಟೆಂಡರ್ ಪ್ರಕಟಣೆ ಪತ್ರ ಸಂಖ್ಯೆ: ಸ.ನೀ.ವಿ/ ಯೋಶಾ-4/ ಕೆರೆಗಳ ಅಭಿವೃದ್ಧಿ ಪ್ಯಾಕೇಜ್ ನಂ.II/ 2005-06/ 2494, ದಿನಾಂಕ: 05.10.2005.
3. ಈ ಕಛೇರಿಯ ಟೆಂಡರ್ ಪ್ರಕಟಣೆ ಪತ್ರ ಸಂಖ್ಯೆ: ಸ.ನೀ.ವಿ/ ಯೋಶಾ-4/ ಕೆರೆಗಳ ಅಭಿವೃದ್ಧಿ ಪ್ಯಾಕೇಜ್ ನಂ.III/ 2005-06/ 2495, ದಿನಾಂಕ: 05.10.2005.
4. ಈ ಕಛೇರಿಯ ಟೆಂಡರ್ ಪ್ರಕಟಣೆ ಪತ್ರ ಸಂಖ್ಯೆ: ಸ.ನೀ.ವಿ/ ಯೋಶಾ-4/ ಕೆರೆಗಳ ಅಭಿವೃದ್ಧಿ ಪ್ಯಾಕೇಜ್ ನಂ.IV/ 2005-06/ 2496, ದಿನಾಂಕ: 05.10.2005.
5. ಈ ಕಛೇರಿಯ ಟೆಂಡರ್ ಪ್ರಕಟಣೆ ಪತ್ರ ಸಂಖ್ಯೆ: ಸ.ನೀ.ವಿ/ ಯೋಶಾ-4/ ಕೆರೆಗಳ ಅಭಿವೃದ್ಧಿ ಪ್ಯಾಕೇಜ್ ನಂ.V/ 2005-06/ 2497, ದಿನಾಂಕ: 05.10.2005.
6. ಈ ಕಛೇರಿಯ ಟೆಂಡರ್ ಪ್ರಕಟಣೆ ಪತ್ರ ಸಂಖ್ಯೆ: ಸ.ನೀ.ವಿ/ ಯೋಶಾ-4/ ಕೆರೆಗಳ ಅಭಿವೃದ್ಧಿ ಪ್ಯಾಕೇಜ್ ನಂ.VI/ 2005-06/ 2498, ದಿನಾಂಕ: 05.10.2005.
7. ಈ ಕಛೇರಿಯ ಟೆಂಡರ್ ಪ್ರಕಟಣೆ ಪತ್ರ ಸಂಖ್ಯೆ: ಸ.ನೀ.ವಿ/ ಯೋಶಾ-4/ ಕೆರೆಗಳ ಅಭಿವೃದ್ಧಿ ಪ್ಯಾಕೇಜ್ ನಂ.VII/ 2005-06/ 2499, ದಿನಾಂಕ: 05.10.2005.

ಮೇಲಿನ ಪ್ರಕಟಣೆಯಲ್ಲಿ ಕರೆಯಲಾದ ಟೆಂಡರುಗಳನ್ನು ಅನಿವಾರ್ಯ ಕಾರಣಗಳಿಂದ ಅನಿರ್ದಿಷ್ಟ ಕಾಲದವರೆಗೆ ಮುಂದೂಡಲಾಗಿದೆ ದಯವಿಟ್ಟು ಗಮನಿಸಬೇಕಾಗಿ ಕೋರಿಕೆ.

**ಪ್ರಕಾಶ ಶ್ರೀಹರಿ ಬಿ.**
ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ.

ಪಿ.ಆರ್.616

## ಲೋಕೋಪಯೋಗಿ ಇಲಾಖೆ
## ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ
## ಅಲ್ಪಾವಧಿ ಟೆಂಡರ್ ಪ್ರಕಟಣೆ
## (ಎರಡು ಲಕೋಟೆ ಪದ್ಧತಿಯಲ್ಲಿ)

**ಸಂಖ್ಯೆ:ಇಎನ್‌ಹೆಚ್/ ಚಿ/ ಸ.ಇ.2/ ಟೆಂ.ಪ್ರ./ ಕೇರನಿ/ 2005-06/ 3068, ದಿನಾಂಕ:28ನೇ ಅಕ್ಟೋಬರ್, 2005**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮೊತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ:**05.12.2005 ರಂದು ಸಾಯಂಕಾಲ 4.00** ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

**ಟೆಂಡರು ಕರೆ ಸಂಖ್ಯೆ** **ಮೊದಲನೇ ಕರೆ**

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇ.ಎಂ.ಡಿ.) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ +ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1. | ಕೇಂದ್ರ ರಸ್ತೆ ನಿಧಿಯಡಿಯಲ್ಲಿ ಮಾಸಡಿ-ಕುಂದೂರು ರಸ್ತೆಯ ಕಿ.ಮೀ. 0.00 ರಿಂದ 15.00 ರವರೆಗಿನ ರಸ್ತೆ ಅಭಿವೃದ್ಧಿ ಕಾಮಗಾರಿ. | 67.00 | 67,000/- | ರೂ.7,000/-+ 12.5% ವ್ಯಾಟ್ | ರಸ್ತೆ ಅಭಿವೃದ್ಧಿ ಕಾಮಗಾರಿ | 5 ತಿಂಗಳು (ಮಳೆಗಾಲ ಸಹಿತ) |
| 2. | ಕೇಂದ್ರ ರಸ್ತೆ ನಿಧಿಯಡಿಯಲ್ಲಿ ಶಿವಮೊಗ್ಗ ಜಿಲ್ಲೆಯ, ಹೊಸನಗರ ತಾಲ್ಲೂಕು ಮತ್ತು ಶಿವಮೊಗ್ಗ ತಾಲ್ಲೂಕಿನ ಹೊಸನಗರ ಸಾಗರ ರಸ್ತೆ ವಯಾ ಬಟ್ಟೆಮಲ್ಲಪ್ಪ- ಪುರಪ್ಪಮನೆ, ಎಂ.ಡಿ.ಆರ್.) ಕಿ.ಮೀ. 0.00 ರಿಂದ 9.00 ರವರೆಗಿನ ರಸ್ತೆ ಅಭಿವೃದ್ಧಿ ಕಾಮಗಾರಿ. | 67.00 | 67,000/- | ರೂ.7,000/-+ 12.5% ವ್ಯಾಟ್ | ರಸ್ತೆ ಅಭಿವೃದ್ಧಿ ಕಾಮಗಾರಿ | 5 ತಿಂಗಳು (ಮಳೆಗಾಲ ಸಹಿತ) |
| 3. | ಕೇಂದ್ರ ರಸ್ತೆ ನಿಧಿಯಡಿಯಲ್ಲಿ ನ್ಯೂ ಟೌನ್ ಪೊಲೀಸ್ ಸ್ಟೇಷನ್‌ನಿಂದ ಜನ್ನಾಪುರ- ಹೊಸನಗರ ಹಳೆಸಿದ್ದಾಪುರ- ಹೊಸಸಿದ್ದಾಪುರ ರಸ್ತೆಯಿಂದ ತಮಡಿ ರಸ್ತೆಗೆ ಸೇರುವ ರಸ್ತೆಯ ಕಿ.ಮೀ. 1.00 ರಿಂದ 9.00 ರವರೆಗಿನ ರಸ್ತೆ ಅಭಿವೃದ್ಧಿ ಕಾಮಗಾರಿ. | 76.00 | 76,000/- | ರೂ.8,000/-+ 12.5% ವ್ಯಾಟ್ | ರಸ್ತೆ ಅಭಿವೃದ್ಧಿ ಕಾಮಗಾರಿ | 5 ತಿಂಗಳು (ಮಳೆಗಾಲ ಸಹಿತ) |
| 4. | ಕೇಂದ್ರ ರಸ್ತೆ ನಿಧಿಯಡಿಯಲ್ಲಿ ಬೆಳಗಟ್ಟ-ಹಾಯಕಲ್- ನಾಯಕನಹಟ್ಟಿ ರಸ್ತೆಯ ಕಿ.ಮೀ. 9.00 ರಿಂದ 19.00 ರವರೆಗಿನ ರಸ್ತೆ ಅಭಿವೃದ್ಧಿ ಕಾಮಗಾರಿ. | 67.00 | 67,000/- | ರೂ.7,000/-+ 12.5% ವ್ಯಾಟ್ | ರಸ್ತೆ ಅಭಿವೃದ್ಧಿ ಕಾಮಗಾರಿ | 5 ತಿಂಗಳು (ಮಳೆಗಾಲ ಸಹಿತ) |

**ಷರತ್ತುಗಳು:**

1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಡಿ.ಡಿ.ಯನ್ನು ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು, ಗುತ್ತಿಗೆದಾರರ ನೊಂದಾವಣಿ ಪತ್ರದ ಪ್ರತಿ ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲಿಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.

| | | |
|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: | 03.12.2005 (ಕಛೇರಿ ವೇಳೆಯಲ್ಲಿ) |
| ಆ) | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ಕೊನೆಯ ದಿನಾಂಕ: | 03.12.2005 (ಕಛೇರಿ ವೇಳೆಯಲ್ಲಿ) |
| ಇ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ: | 05.12.2005, ಮಧ್ಯಾಹ್ನ 4.00 ಗಂಟೆಯ ವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |
| ಈ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: | 05.12.2005, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |
| ಉ) | ತಾಂತ್ರಿಕವಾಗಿ ಅರ್ಹವಾದ ತಾಂತ್ರಿಕ ಬಿಡ್‌ಗಳ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: | 12.12.2005, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು:**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ.: ಎಫ್.ಡಿ.ಆರ್.: ಪೇ ಆರ್ಡರ್: ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ಅನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ. 66ರಕ್ಕೆ ಅನುಗುಣವಾಗಿರತಕ್ಕದ್ದು.

2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು: ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ: ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ.: ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.

3. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲಿಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲಿಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲಿಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತೋಪಕರಣಗಳು | ಬೇಕಾದ ಸಂಖ್ಯೆ | ಮಾಲಿಕತ್ವದ ಪುರಾವೆಗಳು |
|---|---|---|---|
| 1. | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. ಮತ್ತು ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್: ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2. | ಪೇಪರ್ ಫಿನೀಷರ್ | ಒಂದು (1) | -ಸದರಿ- |
| 3. | ವೈಬ್ರೇಟರಿ ರೋಲರ್ | ಒಂದು (1) | -ಸದರಿ- |
| 4. | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | -ಸದರಿ- |
| 5. | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | -ಸದರಿ- |
| 6. | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್. |
| 7. | ಎಕ್ಸ್‌ವೇಟರ್ | ಒಂದು (1) | ಮಾಲಿಕತ್ವದ ಪ್ರಮಾಣ ಪತ್ರ. |
| 8. | ಕಾಂಕ್ರೀಟ್ ಮಿಕ್ಸರ್‌ಗಳು | ಎರಡು (2) | ಖರೀದಿಸಿದ ಇನ್‌ವಾಯ್ಸ್: ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 9. | ವೈಬ್ರೇಟರ್‌ಗಳು | ಎರಡು (2) | -ಸದರಿ- |

4. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡಾ 30ರಷ್ಟು ಪ್ರಮಾಣದ ಇದೇತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡಾ 30ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

5. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಪ್ರಮಾಣದ ಯಾವುದೇ ಷಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್‌ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್‌ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

6. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಟೆಂಡರ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ, ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

7. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು: ಏಜೆನ್ಸಿಗಳು: ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.

8. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.

9. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.

10. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.

11. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರ ಶೆಟ್ಟಿ**
ಕಾರ್ಯಪಾಲಕ ಅಭಿಯಂತರರು,
ರಾ.ಹೆ. ವಿಭಾಗ, ಚಿತ್ರದುರ್ಗ.

ಪಿ.ಆರ್.618

## ಲೋಕೋಪಯೋಗಿ ಇಲಾಖೆ
## ಟೆಂಡರ್ ಪ್ರಕಟಣೆ
### ಸಂಖ್ಯೆ:ಜಿ.ಎನ್.ಎಲ್./ ಎನ್.ಐ.ಟಿ./ ಯು.ಡಿ.ಎನ್./ 2005-06/ಜೇ೪, ದಿನಾಂಕ:5ನೇ ನವೆಂಬರ್, 2005

ಈ ಕೆಳಗಿನ ಕೆಲಸಕ್ಕಾಗಿ ಪ್ರತ್ಯೇಕ ಮೊಹರಾದ ಟೆಂಡರನ್ನು ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಯಮಿತ ಫಾರಂನಲ್ಲಿ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ, ಇವರು ದಿನಾಂಕ: 05.12.2005ರ ಸಂಜೆ 4.00 ಗಂಟೆಯವರೆಗೆ ಟೆಂಡರನ್ನು ಸ್ವೀಕರಿಸುವರು. ಸಾಧ್ಯವಾದಲ್ಲಿ ಟೆಂಡರನ್ನು ಅದೇ ದಿನ ತೆರೆಯಲಾಗುವುದು.

ಖಾಲಿ ಟೆಂಡರ್ ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) **ದಿನಾಂಕ: 28.11.2005ರವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ** ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ರಿಜಿಸ್ಟ್ರೇಷನ್‌ನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು, ಖಾಲಿ ಟೆಂಡರು ಫಾರಂಗಳನ್ನು ಈ ಕಛೇರಿಯಲ್ಲಿ ದಿನಾಂಕ: 01.12.2005 ಮತ್ತು 02.12.2005 ರಂದು ನೀಡಲಾಗುವುದು.

**ಸೂಚನೆಗಳು:**

1) ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
2) ಇ.ಎಂ.ಡಿ. ಯನ್ನು ಪ್ಲೆಡ್ಜ್ ಮಾಡಲಾದ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್, ಬ್ಯಾಂಕ್ ಗ್ಯಾರಂಟಿ, ಕಾಲ್ ಡಿಪೋಜಿಟ್, ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ಸಲ್ಲಿಸುವುದು.
3) ಗುತ್ತಿಗೆದಾರರು ಟೆಂಡರ್ ಬಗ್ಗೆ ಅರ್ಜಿ ಸಲ್ಲಿಸುವಾಗ ಈ ತರಹದ ಕೆಲಸದ ಶೇ.30ರಷ್ಟು ಮೊತ್ತದ ಏಕೈಕ ಕಟ್ಟಡ ಕೆಲಸವನ್ನು ಒಂದೇ ವರ್ಷ/ ಒಂದೇ ಆರ್ಥಿಕ ವರ್ಷದೊಳಗೆ ನಿರ್ವಹಿಸಿದ ಅನುಭವ ಹೊಂದಿದವರಾಗಿದ್ದು, ಈ ಕುರಿತ ಪ್ರಮಾಣ ಪತ್ರವನ್ನು ಸಕ್ರಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
4) ಕಾಮಗಾರಿಗೆ ಬೇಕಾದ ಉಕ್ಕು, ಸಿಮೆಂಟನ್ನು ಗುತ್ತಿಗೆದಾರರೇ ಸ್ವತಃ ಒದಗಿಸಿಕೊಳ್ಳತಕ್ಕದ್ದು. ಇದನ್ನು ಪರೀಕ್ಷೆ ಮಾಡಿಸಿ ಫಲಿತಾಂಶವು ಐ.ಎಸ್.ಎಸ್. ಗುಣವನ್ನು ಖಚಿತ ಪಡಿಸಿ ಕೆಲಸಕ್ಕೆ ಉಪಯೋಗಿಸಿಕೊಳ್ಳತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರು ಸಲ್ಲಿಸುವಾಗ ಗಮನಿಸುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿರಿಸಿದ ಅಂದಾಜು ಮೊತ್ತ | ಮುಂಗಡ ಠೇವಣಿ (ಇಎಂಡಿ) ರೂ. | ಕಾಮಗಾರಿ ಮುಗಿಸಲು ಕಾಲಮಿತಿ (ಮಳೆಗಾಲ ಹೊರತು ಪಡಿಸಿ) | ಟೆಂಡರ್ ನಮೂನೆ | ಟೆಂಡರ್ (ಶೆಡ್ಯೂಲ್ ಬೆಲೆ) | ಅರ್ಹ ಗುತ್ತಿಗೆದಾರರು |
|---|---|---|---|---|---|---|---|
| 1. | ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಶಂಕರನಾರಾಯಣ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ನಿರ್ಮಾಣ (ನೆಲ ಅಂತಸ್ತು) | ರೂ.30,47,100/- | ರೂ.30,500/- | 6 ತಿಂಗಳು | ದರವಾರು | ರೂ.3,300/- | 1ನೇ ದರ್ಜೆ |

**ಶ್ರೀ ಕೆ. ಸುರೇಶ್ ಶೆಟ್ಟಿ**
ಕಾರ್ಯಪಾಲಕ ಇಂಜಿನೀಯರರು,
ಲೋ.ಇ. ಉಡುಪಿ ವಿಭಾಗ, ಉಡುಪಿ.

ಪಿ.ಆರ್.619

## ರೇಷ್ಮೆ ಇಲಾಖೆ

## ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಕಛೇರಿ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ:ಸಿ1(6):ರೇನಿ:20:ಬ್ಯಾಕ್‌ಲಾಗ್:2001-02, ಬೆಂಗಳೂರು, ದಿನಾಂಕ:7ನೇ ನವೆಂಬರ್, 2005**

ಈ ಕಛೇರಿಯ ಅಧಿಸೂಚನೆ ಸಂಖ್ಯೆ:ಸಿ1(6):ರೇನಿ:20: ಬ್ಯಾಕ್‌ಲಾಗ್: 2001-02, ದಿನಾಂಕ: 27.04.2005ರಲ್ಲಿ ರೇಷ್ಮೆ ಇಲಾಖೆಯಲ್ಲಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ 6 ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ **ಪರಿಶಿಷ್ಟ ಜಾತಿಗೆ** ಸೇರಿದ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ, ಆ ಹುದ್ದೆಗಳಿಗೆ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಮೀಸಲಿರಿಸಿದ ತುಂಬದೆ ಇರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001ರ ಅಡಿಯಲ್ಲಿ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಕೆಳಕಂಡಂತೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ. ಈ ಆಯ್ಕೆ ಪಟ್ಟಿಯಿಂದ ಬಾಧಿತರಾಗುವ ಅಭ್ಯರ್ಥಿಗಳು ತಮ್ಮ ಆಕ್ಷೇಪಣೆಗಳನ್ನು ದಿನಾಂಕ: 30.11.2005ರೊಳಗಾಗಿ ಕೆಳಸಹಿದಾರರಿಗೆ ಸಲ್ಲಿಸಬಹುದೆಂದು ಸೂಚಿಸಲಾಗಿದೆ.

### ಮುಖ್ಯಪಟ್ಟಿ

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳ ಸರಾಸರಿ | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 1. | ಸುಭಾಶ್ಚಂದ್ರ ಹುಸನಪ್ಪ ಇಳಕಲ್<br>ನಂ.2/907, 42/ಎ, ಆಂಜನೇಯ ನಗರ,<br>ಆರ್‌ಟಿಓ ಎದುರು, ಸೇಡಂ ರಸ್ತೆ,<br>ಗುಲ್ಬರ್ಗಾ-585105. | 06.01.1974 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>75.92 | ಸಾಮಾನ್ಯ |
| 2. | ಸಿ.ಕೆ. ತ್ರಿವೇಣಿ<br>ಕೆ.ಬಿ. ಚಲವಾದಿ<br>ನಂ.28, ಸೆಕ್ಟರ್ 5, ಶ್ರೀನಗರ, ಮಾಳಮಾರುತಿ<br>ಬಡಾವಣೆ, ಬೆಳಗಾವಿ-570016. | 21.02.1976 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>70.17 | ಮಹಿಳೆ |
| 3. | ಕೃಷ್ಣಕುಮಾರ ಕರಿಯಪ್ಪ ಬುದ್ನಿ<br>ಕರಿಯಪ್ಪ ಬುದ್ನಿ,<br>ಹೂವಿನಹಿಪ್ಪರಗಿ, ತಾ:ಬಸವನಬಾಗೇವಾಡಿ,<br>ಜಿ: ವಿಜಾಪುರ, ಪಿನ್-586208 | 06.01.1975 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>66.25 | ಗ್ರಾಮೀಣ |
| 4. | ಎಸ್. ಮಹದೇವಸ್ವಾಮಿ<br>ಶಿವಮಾಧು,<br>ನಂ.28, ಎನ್‌ಆರ್ ಮಹಲ್, ನ್ಯೂ ಲೇಔಟ್,<br>ರಾಜೇಂದ್ರ ನಗರ, ಮೈಸೂರು-570007. | 06.05.1974 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>69.58 | ಸಾಮಾನ್ಯ |
| 5. | ಎಂ.ಕೆ. ನಿರ್ಮಲ ಲೇಟ್ ಕೃಷ್ಣಪ್ಪ,<br>ನಂ.161, ಕುವೆಂಪು ನಗರ, ಪುಷ್ಪಪಾಂಡುರಂಗ<br>ಕಲ್ಯಾಣ ಮಂಟಪ ಎದುರು, ಮಂಡ್ಯ. | 12.12.1974 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>69.25 | ಮಹಿಳೆ |
| 6. | ಮಲ್ಲಿಕಾರ್ಜುನ ಕೆಂಬಾವಿ<br>ಶಿವಶಂಕರ, ಅಂಚೆ: ಮಣ್ಣೂರು, ತಾ: ಸಿಂಧಗಿ,<br>ಜಿ:ವಿಜಾಪುರ. | 27.07.1974 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>66.08 | ಗ್ರಾಮೀಣ |

### ಹೆಚ್ಚುವರಿ ಪಟ್ಟಿ

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳ ಸರಾಸರಿ | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 1. | ಕೆ.ಎಲ್. ಪ್ರೇಮಸುಧಾ<br>ಕೆ.ಪಿ. ಲಕ್ಷಪ್ಪ,<br>ನಂ.8ಬಿ, ಪುಟ್ಟೇನಹಳ್ಳಿ, ಕೆ.ಹೆಚ್.ಬಿ. ಲೇಔಟ್,<br>ಯಲಹಂಕ, ಬೆಂಗಳೂರು-64. | 06.05.1975 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>68.75 | ಸಾಮಾನ್ಯ |
| 2. | ಬಿ.ಸಿ. ಲಕ್ಷ್ಮಿ<br>ಬಿ. ಚನ್ನಬಸಪ್ಪ,<br>ನಂ.ಬಿ14, ಎನ್‌ಜಿಓಎಸ್ ಕ್ವಾಟರ್ಸ್, ಬಿ-ಬ್ಲಾಕ್,<br>6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10. | 12.07.1973 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>67.08 | ಮಹಿಳೆ |
| 3. | ಪದ್ಮಾವತಿ<br>ಮುರುಗೇಶ್, ಕುಲಸಚಿವರ ಕಛೇರಿ, (ಗಂಡ<br>ಸ್ವಾಮಿನಾಥನ್) ಮಂಗಳೂರು ವಿಶ್ವವಿದ್ಯಾನಿಲಯ,<br>ಮಂಗಳೂರು ಗಂಗೋತ್ರಿ, ಪಿನ್-574199. | 20.07.1975 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>64.00 | ಗ್ರಾಮೀಣ |

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ ಮತ್ತು ಶೇಕಡ ಅಂಕಗಳ ಸರಾಸರಿ | ಹುದ್ದೆಗಳ ಮೀಸಲಾತಿ ವರ್ಗೀಕರಣ |
|---|---|---|---|---|
| 4. | ಸಂತೋಷಕುಮಾರ್ ಬನ್ನಪ್ಪ,<br>ನಂ.331, ಗೌರಮ್ಮ ನಿಲಯ, ಸಿಐಬಿ ಕಾಲೋನಿ, ಅಂಬೇಡ್ಕರ್ ನಗರ, ಗುಲ್ಬರ್ಗಾ. | 01.06.1973 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>68.08 | ಸಾಮಾನ್ಯ |
| 5. | ರೇಣುಕಾ ಬರಮಪ್ಪ ಭಜಂತ್ರಿ<br>ಬರಮಪ್ಪ ಭಜಂತ್ರಿ,<br>ಕೇರ್ ಆಫ್ ಚಂದ್ರಕಾಂತ ಭಜಂತ್ರಿ,<br>ನಂ.ಸಿ1, ರಾಜಭವನಾ ಕ್ವಾಟರ್ಸ್, ರಾಜಭವನ್, ಬೆಂಗಳೂರು-1. | 20.07.1974 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>66.55 | ಮಹಿಳೆ |
| 6. | ಸಿ. ಅಂಜನಮೂರ್ತಿ<br>ಚಿಕ್ಕಹನುಮಪ್ಪ,<br>ನಲ್ಲೇಕಾಮನಹಳ್ಳಿ, ಅಂಚೆ:ಬೇಡತ್ತೂರು,<br>ತಾ: ಮಧುಗಿರಿ, ಜಿ: ತುಮಕೂರು. | 30.03.1969 | ಎಸ್‌ಎಸ್‌ಎಲ್‌ಸಿ<br>ಹಿ. ಕನ್ನಡ ಬೆರಳಚ್ಚು<br>63.25 | ಗ್ರಾಮೀಣ |

ಪಿ.ಆರ್.620

ಆಯ್ಕೆ ಪ್ರಾಧಿಕಾರ,
ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು,
ಹಾಗೂ ರೇಷ್ಮೆ ನಿರ್ದೇಶಕರ ಪರವಾಗಿ.

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ
## ಅಧಿಸೂಚನೆ
### ಸಂಖ್ಯೆ: ಸಂವ್ಯಶಾಇ 112 ಆಡಳಿತ 2005, ಬೆಂಗಳೂರು, ದಿನಾಂಕ: 15ನೇ ನವೆಂಬರ್, 2005

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 (2000ದ ಕರ್ನಾಟಕ ಅಧಿನಿಯಮ ಸಂಖ್ಯೆ:29)ರ 8ನೇ ಪರಕರಣದ (1)ನೇ ಉಪ-ಪ್ರಕರಣ ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು, 2000ದ 4ನೇ ನಿಯಮದ (2)ನೇ ಉಪ ನಿಯಮದನ್ವಯ ರಾಜ್ಯ ಟೆಂಡರ್ ಬುಲೆಟಿನ್ ಅನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದೆ.

## ಭಾಷಾಂತರ ನಿರ್ದೇಶನಾಲಯ, 3ನೇ ಮಹಡಿ, 'ಎಫ್' ಬ್ಲಾಕ್, ಸಿಬಿಎಬಿ ಕಾಂಪ್ಲೆಕ್ಸ್, ಕಾವೇರಿ ಭವನ, ಬೆಂಗಳೂರು-560009
## ಟೆಂಡರುಗಳಿಗಾಗಿ ಆಹ್ವಾನ
### ಸಂಖ್ಯೆ:ಕೇಂಅಭಾ/ ಹೊಗು/1/ 2005, ಬೆಂಗಳೂರು, ದಿನಾಂಕ:28ನೇ ಅಕ್ಟೋಬರ್, 2005

ಈ ಮುಂದಿನ ಕೋಷ್ಟಕದಲ್ಲಿ ವಿವರಿಸಿರುವ ಕೆಲಸಕ್ಕಾಗಿ ನೋಂದಾಯಿತ ಅರ್ಹ ಟೆಂಡರುದಾರರಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರುದಾರರು ಕೋಷ್ಟಕದಲ್ಲಿ ತಿಳಿಸಿರುವ ಕೆಲಸಕ್ಕೆ ಟೆಂಡರುಗಳನ್ನು ಸಲ್ಲಿಸಬಹುದು. ಗುತ್ತಿಗೆಯನ್ನು ನೀಡಲು ಅರ್ಹವಾಗುವುದಕ್ಕೆ ಸಂಬಂಧಿಸಿದಂತೆ **'ಟೆಂಡರುದಾರರಿಗೆ ಸೂಚನೆಗಳು ಭಾಗ'**ದ ಖಂಡ-3ರಲ್ಲಿ ನಿರ್ದಿಷ್ಟಪಡಿಸಿರುವ ಕನಿಷ್ಠ ಅರ್ಹತಾ ಮಾನದಂಡವನ್ನು ನಮೂದಿಸುವಂತೆ ಟೆಂಡರುದಾರರಿಗೆ ತಿಳಿಸಲಾಗಿದೆ.

2. ಟೆಂಡರು ದಸ್ತಾವೇಜುಗಳನ್ನು, ಅರ್ಜಿಯೊಂದಿಗೆ ಈ ಮುಂದಿನ ಕೋಷ್ಟಕದಲ್ಲಿ ಸೂಚಿಸಿರುವ ವಾಪಸ್ಸು ಮಾಡಲಾಗದ 250/- ರೂ. ಶುಲ್ಕವನ್ನು (ಎರಡು ಸೆಟ್‌ಗಳಿಗೆ), ನಗದು ರೂಪದಲ್ಲಿ ಅಥವಾ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ- ಇವರ ಹೆಸರಿಗೆ ತೆಗೆದ ಬೆಂಗಳೂರಿನಲ್ಲಿ ಪಾವತಿಸತಕ್ಕ ಯಾವುದೇ ರಾಷ್ಟ್ರೀಕೃತ/ ಅನುಸೂಚಿತ ಬ್ಯಾಂಕಿನ ಡಿಮ್ಯಾಂಡ್ ಡ್ರಾಫ್ಟ್/ ಪೇ ಆರ್ಡರ್ ಮೂಲಕ ಪಾವತಿಸಿ ಭಾಷಾಂತರ ನಿರ್ದೇಶನಾಲಯದ ಕಛೇರಿಯಲ್ಲಿ **ದಿನಾಂಕ: 28.11.2005 ರಿಂದ 03.12.2005ರ ವರೆಗೆ** ಖರೀದಿಸಬಹುದು. ಆಸಕ್ತ ಟೆಂಡರುದಾರರು ಹೆಚ್ಚಿನ ಮಾಹಿತಿಯನ್ನು ಮೇಲೆ ಹೇಳಿದ ವಿಳಾಸದಿಂದ ಪಡೆಯಬಹುದು.

3. ಭರ್ತಿ ಮಾಡಿರುವ ಟೆಂಡರುಗಳನ್ನು ಟೆಂಡರು ಆಹ್ವಾನಿಸುವ ಮತ್ತು ಅಂಗೀಕರಿಸುವ ಅಧಿಕಾರಿಗೆ 08.12.2005ರಂದು 4.00 ಗಂಟೆಗೆ ಅಥವಾ ಅದಕ್ಕೆ ಮುಂಚೆ ತಲುಪುವಂತೆ ಕಳುಹಿಸತಕ್ಕದ್ದು ಮತ್ತು ಅವುಗಳನ್ನು ಅದೇ ದಿನ 5.00 ಗಂಟೆಗೆ ಹಾಜರಾಗಲು ಇಚ್ಛಿಸುವ ಟೆಂಡರುದಾರರ ಸಮಕ್ಷದಲ್ಲಿ ತೆರೆಯಲಾಗುವುದು. ಒಂದುವೇಳೆ, ನಿರ್ದಿಷ್ಟಪಡಿಸಿದಂತೆ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕದಂದು ರಜಾ ದಿನವಾಗಿದ್ದರೆ, ಟೆಂಡರುಗಳನ್ನು ಮುಂದಿನ ಕೆಲಸದ ದಿನದಂದು ಅದೇ ಸಮಯಕ್ಕೆ ಮತ್ತು ಸ್ಥಳದಲ್ಲಿ ಸ್ವೀಕರಿಸಲಾಗುವುದು ಮತ್ತು ತೆರೆಯಲಾಗುವುದು.

4. ಇತರೆ ವಿವರಗಳನ್ನು ಟೆಂಡರು ದಸ್ತಾವೇಜುಗಳಲ್ಲಿ ನೋಡುವುದು.

| ಪ್ಯಾಕೇಜ್ ಸಂಖ್ಯೆ | ಕೆಲಸದ ಹೆಸರು | ಕೆಲಸದ ಅಂದಾಜು ಮೊಬಲಗು | ದಸ್ತಾವೇಜು ವೆಚ್ಚ | ಪೂರ್ಣಗೊಳಿಸಬೇಕಾದ ಅವಧಿ |
|---|---|---|---|---|
| 1 | 2 | 3 | 4 | 5 |
| ಕೇಂಅಭಾ/ ಹೊಗು/ 1/2005 | ಕೇಂದ್ರ ಅಧಿನಿಯಮಗಳನ್ನು ಇಂಗ್ಲೀಷ್‌ನಿಂದ ಕನ್ನಡಕ್ಕೆ ಭಾಷಾಂತರಿಸುವುದು. | ಒಟ್ಟು ಕೆಲಸದ ಗಾತ್ರ ಸುಮಾರು 8,000 ಪುಟಗಳು (ಸುಮಾರು 450 ಪದಗಳನ್ನೊಳಗೊಂಡ ಒಂದು ಪುಟ) ಟೆಂಡರುಗಳನ್ನು ಆಹ್ವಾನಿಸುವ ಮತ್ತು ಅಂಗೀಕರಿಸುವ ಅಧಿಕಾರಿಯು ಈ ಕೆಲಸವನ್ನು 1000, 500 ಹಾಗೂ 200 ಪುಟಗಳ ಪ್ಯಾಕೇಜನ್ನಾಗಿ ವಿಂಗಡಿಸಬಹುದಾಗಿದೆ. ಈ ಆಧಾರದ ಮೇಲೆ ಟೆಂಡರುದಾರರು ದರ ಸೂಚಿಸಬೇಕು.<br>ಟೆಂಡರು ಆಹ್ವಾನಿಸುವ ಮತ್ತು ಅಂಗೀಕರಿಸುವ ಅಧಿಕಾರಿಯು ಟೆಂಡರುದಾರರ ಸಾಮರ್ಥ್ಯ ಹಾಗೂ ಅನುಭವವನ್ನು ಪರಿಗಣಿಸಿ ಮೇಲ್ಕಂಡ ಪ್ಯಾಕೇಜುಗಳನ್ನು ಟೆಂಡರುದಾರರಿಗೆ ವಹಿಸಬಹುದು. | ರೂ. 250/- | ಕೆಲಸ ವಹಿಸಿಕೊಟ್ಟ ದಿನಾಂಕದಿಂದ 2 ತಿಂಗಳು |

ಭರ್ತಿ ಮಾಡಿದ ಟೆಂಡರ್ ದಸ್ತಾವೇಜಿನೊಂದಿಗೆ, ಪೂರ್ವ ಅರ್ಹತಾ ಅಗತ್ಯತೆಗಳನ್ನು ಹೊಂದಿರುವ ಬಗ್ಗೆ ಅಗತ್ಯ ಪುರಾವೆಗಳನ್ನು ಒದಗಿಸತಕ್ಕದ್ದು. ತಪ್ಪಿದಲ್ಲಿ, ಟೆಂಡರುಗಳನ್ನು ತಿರಸ್ಕರಿಸಲಾಗುವುದು. ಈ ಸಂಬಂಧದಲ್ಲಿ ನಂತರ ಬರುವ ಯಾವುವೇ ಮನವಿಗಳನ್ನು ಪುರಸ್ಕರಿಸಲಾಗುವುದಿಲ್ಲ.

**ಏಜೆನ್ಸಿಗಳ ಪೂರ್ವ ಅರ್ಹತೆಗಳು:**

1) ನೋಂದಾಯಿತ ಭಾಷಾಂತರ ಏಜೆನ್ಸಿ/ ವ್ಯಕ್ತಿಗಳ ಗುಂಪು ಆಗಿರಬೇಕು.
2) ಕನಿಷ್ಠ 5 ವರ್ಷಗಳಿಂದ ಕಾನೂನುಗಳ ಅಥವಾ ಕಾನೂನಿಗೆ ಸಂಬಂಧಿಸಿದ ಭಾಷಾಂತರ ಕಾರ್ಯದಲ್ಲಿ ತೊಡಗಿರಬೇಕು.
3) ಕಾನೂನುಗಳನ್ನು ಮೂಲ ಆಶಯಕ್ಕೆ ಧಕ್ಕೆಯಾಗದಂತೆ ನಿಷ್ಕೃಷ್ಟವಾಗಿ ಭಾಷಾಂತರ ಮಾಡಬಲ್ಲ ಕನಿಷ್ಠ 5 ಭಾಷಾಂತರಕಾರರನ್ನು ಹೊಂದಿರಬೇಕು.
4) ಕಳೆದ 5 ವರ್ಷಗಳಲ್ಲಿ ಎರಡರಿಂದ ಮೂರು ಅಧಿನಿಯಮಗಳನ್ನು ಇಂಗ್ಲೀಷಿನಿಂದ ಕನ್ನಡಕ್ಕೆ ಭಾಷಾಂತರಿಸಿರುವ ಅನುಭವ ಹೊಂದಿರಬೇಕು ಅಥವಾ ಅಧಿನಿಯಮಗಳಂತಹ ಕ್ಲಿಷ್ಟವಾದ ಭಾಷಾಂತರವನ್ನು ಮಾಡಿದ ಅನುಭವ ಹೊಂದಿರಬೇಕು.
5) ತಾವು ವಹಿಸಿಕೊಂಡ ಭಾಷಾಂತರ ಕಾರ್ಯವನ್ನು ಅತ್ಯುತ್ತಮವಾಗಿ ಮತ್ತು ನಿಗದಿತ ಸಮಯದೊಳಗೆ ಮುಗಿಸಿಕೊಟ್ಟಿರುವ ದಾಖಲೆಯನ್ನು ಹೊಂದಿರಬೇಕು.

**ಟಿಪ್ಪಣಿ:** ಅವಶ್ಯ ಕಂಡಲ್ಲಿ ಟೆಂಡರ್ ಆಹ್ವಾನಿಸುವ ಮತ್ತು ಅಂಗೀಕರಿಸುವ ಅಧಿಕಾರಿಯು ಮೇಲಿನ 3 ಮತ್ತು 5ರಲ್ಲಿರುವ ಅರ್ಹತೆಯನ್ನು ಸಡಿಲಿಸಲು/ ವಿನಾಯಿತಿ ನೀಡಲು ಅಧಿಕಾರ ಹೊಂದಿರುತ್ತಾರೆ.

**ನಿಬಂಧನೆಗಳು ಮತ್ತು ಷರತ್ತುಗಳು:**

1) ನಿಗದಿತ ಸಮಯದೊಳಗೆ ಉತ್ತಮ ಗುಣಮಟ್ಟದ ಭಾಷಾಂತರವನ್ನು ಗಣಕ ಯಂತ್ರದಲ್ಲಿ, ನುಡಿ ತಂತ್ರಾಂಶದಲ್ಲಿ ಅಳವಡಿಸಿ ಕನಿಷ್ಠ 5 ಹಾರ್ಡ್ ಕಾಪಿಗಳನ್ನು ಮೂಲ ಅಧಿನಿಯಮದೊಂದಿಗೆ ಒದಗಿಸಬೇಕು.
2) ಭಾಷಾಂತರದ ಗುಣಮಟ್ಟದ ಬಗ್ಗೆ ಪ್ರತಿಯೊಂದು ಅಧಿನಿಯಮದ ಕೊನೆಯಲ್ಲಿ ಪ್ರಮಾಣೀಕರಿಸಬೇಕು.
3) ಭಾಷಾಂತರವನ್ನು ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗವು ಪರಿಶೀಲನೆ ಮಾಡಿದ ಮೇಲೆ ತಿದ್ದುಪಡಿಗಳನ್ನು ಅಳವಡಿಸಿ 2 ಹಾರ್ಡ್ ಕಾಪಿಗಳನ್ನು ಮತ್ತು ಒಂದು ಸಾಫ್ಟ್ ಕಾಪಿಯನ್ನು ಒದಗಿಸಬೇಕು.
4) ಭಾಷಾಂತರವನ್ನು ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗವು ಪರಿಶೀಲನೆ ಮಾಡಿ ಅನುಮೋದಿಸಿದ ನಂತರ ಭಾಷಾಂತರ ವೆಚ್ಚವನ್ನು ಸಂದಾಯ ಮಾಡಲಾಗುವುದು.
5) ಯಾವುದೇ ಕಾರಣ ನೀಡದೆ ಟೆಂಡರುಗಳನ್ನು ಅಂಗೀಕರಿಸುವ ಮತ್ತು ತಿರಸ್ಕರಿಸುವ ಅಧಿಕಾರ ಟೆಂಡರುಗಳನ್ನು ಆಹ್ವಾನಿಸುವ ಮತ್ತು ಅಂಗೀಕರಿಸುವ ಅಧಿಕಾರಿಗಿರುತ್ತದೆ.
6) ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗವು ಯಾವುದೇ ಭಾಷಾಂತರದಲ್ಲಿ ಗಣನೀಯ ಸಂಖ್ಯೆಯ ತಪ್ಪುಗಳನ್ನು ಗಮನಿಸಿದರೆ, ಅಂಥ ಭಾಷಾಂತರವನ್ನು ತಿರಸ್ಕರಿಸಲು ನಿರ್ದೇಶಕರು, ಭಾಷಾಂತರ ಇಲಾಖೆಗೆ ಕರ್ನಾಟಕ ರಾಜಭಾಷಾ ಆಯೋಗವು ಸೂಚಿಸಬಹುದು. ಅಂಥ ಭಾಷಾಂತರವನ್ನು ತಿರಸ್ಕರಿಸಲಾಗುವುದು. ತಿರಸ್ಕರಿಸಲಾದ ಭಾಷಾಂತರಕ್ಕೆ ಯಾವುದೇ ಹಣ ಸಂದಾಯ ಮಾಡಲಾಗುವುದಿಲ್ಲ.
7) ಭರ್ತಿ ಮಾಡಿದ ಟೆಂಡರು ದಸ್ತಾವೇಜಿನೊಂದಿಗೆ ಏಜೆನ್ಸಿ/ ವ್ಯಕ್ತಿಗಳ ಗುಂಪು ಈ ಹಿಂದೆ ಭಾಷಾಂತರಿಸಿರುವಂಥ ಒಂದು ಅಧಿನಿಯಮದ ಆಂಗ್ಲ ಮತ್ತು ಕನ್ನಡ ಆವೃತ್ತಿಗಳನ್ನು ಲಗತ್ತಿಸಿರಬೇಕು ಅಥವಾ ಖಾಲಿ ಟೆಂಡರು ದಸ್ತಾವೇಜಿನೊಂದಿಗೆ ಇಲಾಖೆಯು ನೀಡುವ ಒಂದು ಕೇಂದ್ರ ಅಧಿನಿಯಮವನ್ನು ಕನ್ನಡಕ್ಕೆ ಭಾಷಾಂತರಿಸಿ ಕನ್ನಡ ಮತ್ತು ಇಂಗ್ಲೀಷ್ ಪ್ರತಿಗಳನ್ನು ಭರ್ತಿ ಮಾಡಿದ ಟೆಂಡರ್ ದಸ್ತಾವೇಜಿನೊಂದಿಗೆ ಲಗತ್ತಿಸಿರಬೇಕು.
8) ಏಜೆನ್ಸಿ/ ವ್ಯಕ್ತಿಗಳ ಗುಂಪಿಗೆ ಇರುವ ಪೂರ್ವ ಅರ್ಹತೆಗಳ ಬಗ್ಗೆ ಅಗತ್ಯ ಪುರಾವೆಗಳನ್ನು ಒದಗಿಸಬೇಕು.
9) ಅಧಿನಿಯಮಗಳಲ್ಲಿನ ಪಾರಿಭಾಷಿಕ ಪದಗಳ ಸಂವಾದಿ ಕನ್ನಡ ಪಾರಿಭಾಷಿಕ ಪದಗಳ ಬಳಕೆಗೆ ಸಂಬಂಧಿಸಿದಂತೆ ಭಾಷಾಂತರ ಇಲಾಖೆ ಸಿದ್ಧಪಡಿಸಿದ ಕಾನೂನು ಪದಕೋಶ, ವಿಶ್ವವಿದ್ಯಾಲಯ ಅಥವಾ ಕನ್ನಡ ಸಾಹಿತ್ಯ ಪರಿಷತ್ತು ಅಥವಾ ಸರ್ಕಾರ ಪ್ರಕಟಿಸಿರುವ ನಿಘಂಟುಗಳನ್ನು ಅವಲಂಬಿಸಬೇಕು ಮತ್ತು ಅವುಗಳಲ್ಲಿ ನೀಡಲಾದ ಸಂವಾದಿ ಪದಗಳನ್ನೇ ಬಳಸಬೇಕು.
10) ಭಾಷಾಂತರಕ್ಕೆ ವಹಿಸಿಕೊಟ್ಟ ಪುಟಗಳ ಸಂಖ್ಯೆಯ ಆಧಾರದ ಮೇಲೆ ಭಾಷಾಂತರ ವೆಚ್ಚವನ್ನು ಸಂದಾಯ ಮಾಡಲಾಗುತ್ತದೆ.

**ಸಿ.ವಿ. ಸತ್ಯವತಿ**
ಉಪನಿರ್ದೇಶಕರು ಮತ್ತು ಟೆಂಡರು
ಆಹ್ವಾನಿಸುವ ಮತ್ತು ಅಂಗೀಕರಿಸುವ ಅಧಿಕಾರಿ,
ಭಾಷಾಂತರ ನಿರ್ದೇಶನಾಲಯ, ಬೆಂಗಳೂರು-9.

**ರಿಚರ್ಡ್ ಲೋಬೊ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ,
ಸರ್ಕಾರದ ಉಪಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ
ಹಾಗೂ ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿ.

ಪಿ.ಆರ್. 621